## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 489
2. ಮಾನ್ಯ ಸದಸ್ಯರ ಹೆಸರು : ಶ್ರೀ ಬಿ.ಕೆ.ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು)
3. ಉತ್ತರಿಸುವ ದಿನಾಂಕ : 24/09/2020
4. ಉತ್ತರಿಸುವ ಸಚಿವರು : ಮಾನ್ಯ ಗೃಹ ಸಚಿವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರಿನಲ್ಲಿ ಅಸ್ತಿತ್ವದಲ್ಲಿರುವ ಎಫ್.ಎಸ್.ಎಲ್. (ವಿಧಿ ವಿಜ್ಞಾನ ಪ್ರಯೆ+ೂೀಗಾಲಯ)ವನ್ನು ಆಧುನೀಕರಿಸಲು ಸರ್ಕಾರದ ಮುಂದೆ ಯಾವುದಾದರೂ ಪ್ರಸ್ತಾಪವಿದೆಯೇ ; | ಹೌದು |
| ಆ) | ಅಸ್ತಿತ್ವದಲ್ಲಿರುವ ಎಫ್.ಎಸ್.ಎಲ್. ಇತ್ತೀಚಿನ ತಾಂತ್ರಿಕತೆಯೊಂದಿಗೆ ಸಂಪೂರ್ಣವಾಗಿ ಸಜ್ಜುಗೊಂಡಿದೆಯೇ ; | ನ್ಯಾಯ ವಿಜ್ಞಾನ ಪ್ರಯೋಗಾಲಯವು ಇತ್ತೀಚಿನ ತಾಂತ್ರಿಕತೆಯೊಂದಿಗೆ ಸಂಪೂರ್ಣವಾಗಿ ಸಜ್ಜುಗೊಳ್ಳುತ್ತಿದೆ. |
| ಇ) | ಈ ವಿಚಾರದಲ್ಲಿ ಸರ್ಕಾರ ಯಾವ ಕ್ರಮಗಳನ್ನು ತೆಗೆದುಕೊಳ್ಳುತ್ತದೆ ; | ನ್ಯಾಯ ವಿಜ್ಞಾನ ಪ್ರಯೋಗಾಲಯ ಬೆಂಗಳೂರು ಘಟಕದಲ್ಲಿ ಹೊಸದಾಗಿ<br>1) ಕಂಪ್ಯೂಟರ್ ಫಾರೆನ್ಸಿಕ್ ವಿಭಾಗ<br>2) ಮೊಬೈಲ್ ಫಾರೆನ್ಸಿಕ್ ವಿಭಾಗ<br>3) ಆಡಿಯೊ ವಿಡಿಯೋ ವಿಭಾಗ<br>4) ನಾರ್‌ಕೋಟಿಕ್ಸ್ ವಿಭಾಗಗಳನ್ನು ಸ್ಥಾಪಿಸಲು ಅನುಮತಿಸಲಾಗಿರುತ್ತದೆ.<br><br>ಪ್ರಾನ್ಯಾವಿಪ್ರ, ಮಂಗಳೂರು, ಬೆಳಗಾವಿ, ಕಲಬುರ್ಗಿ, ಮೈಸೂರು ಹಾಗೂ ದಾವಣಗೆರೆ ಘಟಕದಲ್ಲಿ ಹೊಸದಾಗಿ<br>1) ಪ್ರಶ್ನಿತ ದಸ್ತಾವೇಜು ವಿಭಾಗ<br>2) ರಸಾಯನಶಾಸ್ತ್ರ ವಿಭಾಗ<br>3) ಅಗ್ನಿ ಅಸ್ತ್ರ ವಿಭಾಗ(ಮಂಗಳೂರು ಮಾತ್ರ) ಸ್ಥಾಪಿಸಲು ಅನುಮತಿಸಲಾಗಿರುತ್ತದೆ.<br><br>ನ್ಯಾಯ ವಿಜ್ಞಾನ ಪ್ರಯೋಗಾಲಯದ ವಿವಿಧ ಹುದ್ದೆಗಳ ನೇಮಕಾತಿ ಪ್ರಕ್ರೀಯೆ ಈ ಕೆಳಕಂಡಂತಿರುತ್ತವೆ.<br>1) 54 ವೈಜ್ಞಾನಿಕ ಅಧಿಕಾರಿಗಳ ನೇಮಕಾತಿ ಪ್ರಕ್ರಿಯೆ ಪ್ರಾರಂಭಿಸಿದ್ದು, ಲಿಖಿತ ಪರೀಕ್ಷಾ ಹಂತದಲ್ಲಿರುತ್ತದೆ.<br>2) 37 ಪ್ರಯೋಗಾಲಯ ಸೇವಕರು, 7 ಇಇಜಿ ಟೇಕ್‌ನಿಷಿಯನ್ ಮತ್ತು 1 ಪ್ರಯೋಗಾಲಯ ಸಹಾಯಕರ (ಫೋಟೊಗ್ರಫಿ) ಹುದ್ದೆಯ ನೇಮಕಾತಿ ಪ್ರಕ್ರಿಯೆ ಪ್ರಗತಿಯಲ್ಲಿದೆ. |
| ಈ) | ಎಫ್.ಎಸ್.ಎಲ್.ಗೆ ಸ್ವತಂತ್ರ ಪರಿಣಾಮಕಾರಿ ಕಾರ್ಯನಿರ್ವಹಣೆಗೆ ಅನುಕೂಲವಾಗುವಂತೆ ಸ್ವಾಯತ್ತ ಸ್ಥಾನಮಾನವನ್ನು ನೀಡಿಲ್ಲವೇಕೆ ? | ಸದರಿ ಸಂಸ್ಥೆಯು ನಿಷ್ಪಕ್ಷಪಾತವಾಗಿ ಕಾರ್ಯನಿರ್ವಹಿಸುತ್ತಿದೆ. |

**ಸಂಖ್ಯೆ:ಹೆಚ್‌ಡಿ 81 ಪಿಬಿಎಲ್ 2020**

**(ಬಸವರಾಜ ಬೊಮ್ಮಾಯಿ)**
ಗೃಹ ಸಚಿವರು